# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 42
ಮಾನ್ಯ ಸದಸ್ಯರ ಹೆಸರು : ಶ್ರೀ ಟಿ.ಎ.ಶರವಣ
ಉತ್ತರಿಸಬೇಕಾದ ದಿನಾಂಕ : 02.03.2020
ಉತ್ತರಿಸಬೇಕಾದ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಕಳೆದ 05 ವರ್ಷಗಳ ಲಿಂಗಾನುಪಾತದ ಅಂಕಿಅಂಶಗಳನ್ನು ನೀಡುವುದು ಮತ್ತು ವರ್ಷದಿಂದ ವರ್ಷಕ್ಕೆ ಕುಸಿಯುತ್ತಿರುವ ಲಿಂಗಾನುಪಾತ ತಡೆಯಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ರಾಜ್ಯದಲ್ಲಿ ಕಳೆದ 05 ವರ್ಷಗಳ ಅಂಕಿ ಅಂಶಗಳನ್ನು ಅನುಬಂಧದಲ್ಲಿ ನೀಡಲಾಗಿದೆ.<br>ಕುಸಿಯುತ್ತಿರುವ ಲಿಂಗಾನುಪಾತವನ್ನು ತಡೆಯಲು ಸರ್ಕಾರವು ಈ ಕೆಳಗಿನಂತೆ ಕ್ರಮಗಳನ್ನು ಕೈಗೊಂಡಿದೆ:<br>• ಪಿ.ಸಿ & ಪಿ.ಎನ್.ಡಿ.ಟಿ. (Pre Conception and Pre Natal Diagnostic Techniques Act) ಕಾಯ್ದೆಯ ಕುರಿತು All India Radio, ಖಾಸಗಿ ರೇಡಿಯೋ, ಖಾಸಗಿ ಟಿ.ವಿ. ಮಾಧ್ಯಮ ಹಾಗೂ ಸಿನಿಮಾ ಮಂದಿರಗಳ ಮುಖಾಂತರ ಜನ ಸಾಮಾನ್ಯರಲ್ಲಿ ಅರಿವು ಮೂಡಿಸಲಾಗುತ್ತಿದೆ.<br>• “ಬಾಲಿಕಾ” Online submission of F-Form ತಂತ್ರಾಂಶ ಜಾರಿಯಲ್ಲಿದ್ದು, ಆನ್‌ಲೈನ್ ಮುಖಾಂತರ ಕಡ್ಡಾಯವಾಗಿ ಎಲ್ಲಾ ಸ್ಕ್ಯಾನಿಂಗ್ ಸೆಂಟರ್‌ಗಳು ನೋಂದಣಿಯಾಗಿದ್ದು, F-Form ಗಳನ್ನು ಸಲ್ಲಿಸುತ್ತಿದ್ದಾರೆ.<br>• ಆರು ಪ್ರಾಸಿಕ್ಯೂಷನ್ ವಿಭಾಗೀಯ ಮಟ್ಟದ ಸರ್ಕಾರಿ ಅಭಿಯೋಜಕರು ಮತ್ತು ಸಹಾಯಕ ಸರ್ಕಾರಿ ಅಭಿಯೋಜಕರಿಗೆ ಪಿ.ಸಿ & ಪಿ.ಎನ್.ಡಿ.ಟಿ. ಕಾಯ್ದೆಯ ಕುರಿತು ಅರಿವು ಮೂಡಿಸುವ ಕಾರ್ಯಗಾರ ನಡೆಸಲಾಗಿದ್ದು, ಕಲ್ಬುರ್ಗಿ ವಿಭಾಗೀಯ ಮಟ್ಟದ ಕಾರ್ಯಗಾರ ನಡೆಸುವ ಪ್ರಕ್ರಿಯೆ ಚಾಲ್ತಿಯಲ್ಲಿದೆ.<br>• ರಾಜ್ಯ ಮಟ್ಟದ ಅಧಿಕಾರಿಗಳಿಂದ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಪಿ.ಸಿ & ಪಿ.ಎನ್.ಡಿ.ಟಿ. ಕಾಯ್ದೆಯ ಕುರಿತು ಅರಿವು ಮೂಡಿಸುವ ಕಾರ್ಯಗಾರಗಳನ್ನು ನಡೆಸಲಾಗುತ್ತಿದೆ. |

| | | |
|---|---|---|
| | | • ಜಿಲ್ಲಾ ಮಟ್ಟದಲ್ಲಿ ಸ್ಕ್ಯಾನಿಂಗ್ ಸೆಂಟರಿನ ವೈದ್ಯರಿಗೆ, ಆಶಾ ಕಾರ್ಯಕರ್ತೆಯರಿಗೆ, ಕಿರಿಯ ಮಹಿಳಾ ಆರೋಗ್ಯ ಸಹಾಯಕರಿಗೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಿಬ್ಬಂದಿಗಳು ಹಾಗೂ ಇತರೆ ಸಿಬ್ಬಂದಿಗಳಿಗೆ ಪಿ.ಸಿ & ಪಿ.ಎನ್.ಡಿ.ಟಿ. ಕಾಯ್ದೆಯ ಕುರಿತು ಅರಿವು ಮೂಡಿಸುವ ಕಾರ್ಯಗಾರಗಳನ್ನು ನಡೆಸಲಾಗುತ್ತಿದೆ.<br>• ಪಿ.ಸಿ & ಪಿ.ಎನ್.ಡಿ.ಟಿ. ಕಾಯ್ದೆಯಡಿ ಬರುವ ಎಲ್ಲಾ *ಕಾನೂನು ಬದ್ಧ ಸಮಿತಿಗಳನ್ನು ರಚಿಸಲಾಗಿದೆ.*<br>• ಜಿಲ್ಲಾ ಸಕ್ಷಮ ಪ್ರಾಧಿಕಾರಿಗಳಾದ ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಜಿಲ್ಲಾ ತಪಾಸಣಾ ಮತ್ತು ಮೇಲ್ವಿಚಾರಣಾ ಸಮಿತಿಯು ಸ್ಕ್ಯಾನಿಂಗ್ ಸೆಂಟರ್‌ಗಳಿಗೆ ಪ್ರತಿ ಮೂರು ತಿಂಗಳಿಗೊಮ್ಮೆ ಆಕಸ್ಮಿಕ ಭೇಟಿ ನೀಡಿ, ತಪಾಸಣೆ ನಡೆಸುತ್ತಿರುತ್ತಾರೆ.<br>• ಅನಧಿಕೃತ ಸ್ಕ್ಯಾನಿಂಗ್ ಸೆಂಟರ್ ವಿರುದ್ಧ ಮತ್ತು ಅಕ್ರಮ ಗರ್ಭಪಾತ ಎಸಗುವವರ ವಿರುದ್ಧ ದೂರು ನೀಡಿದವರಿಗೆ ರೂ.50,000/– ಬಹುಮಾನ ನೀಡುವುದಾಗಿ ಪತ್ರಿಕಾ ಪ್ರಕಟಣೆಗಳನ್ನು ನೀಡಲಾಗಿದೆ.<br>• ಹೆಣ್ಣು ಭ್ರೂಣ ಹತ್ಯೆ ಅಥವಾ ಅನಧಿಕೃತ ಸ್ಕ್ಯಾನಿಂಗ್ ಸೆಂಟರ್‌ಗಳ ವಿರುದ್ಧ ಸಾರ್ವಜನಿಕರು 104 ಸಹಾಯವಾಣಿಗೆ ಕರೆ ಮಾಡಿ ಮಾಹಿತಿ ನೀಡಲು ಅವಕಾಶ ಮಾಡಿಕೊಡಲಾಗಿದೆ. |
| ಆ) | ರಾಜ್ಯದಲ್ಲಿ ಹೆಣ್ಣು ಭ್ರೂಣ ಲಿಂಗ ಪತ್ತೆ ಪ್ರಕರಣಗಳಿಗೆ ಸಂಬಂಧಿಸಿದಂತೆ 2015ರಿಂದ 2018ರವರೆಗಿನ ಇಲಾಖೆಯ ವರದಿಯನುಸಾರ ಗರ್ಭಪಾತ ಪ್ರಕರಣಗಳ ಸಂಖ್ಯೆ ಎಷ್ಟು? | ರಾಜ್ಯದಲ್ಲಿ ಹೆಣ್ಣು ಭ್ರೂಣ ಹತ್ಯೆ ಮತ್ತು ಭ್ರೂಣ ಲಿಂಗ ಪತ್ತೆ ಪ್ರಕರಣಗಳಿಗೆ ಸಂಬಂಧಿಸಿದಂತೆ 2015 ರಿಂದ 2018ರವರೆಗೆ ಯಾವುದೇ ಗರ್ಭಪಾತ ಪ್ರಕರಣಗಳು ದಾಖಲಾಗಿರುವುದಿಲ್ಲ. |
| ಇ) | 2019ನೇ ಸಾಲಿನ ಪ್ರಕರಣಗಳ ಕುರಿತು ಆರೋಗ್ಯ ಇಲಾಖೆಯು ವರದಿಯನ್ನು ಇದುವರೆವಿಗೂ ಬಿಡುಗಡೆ ಮಾಡದಿರಲು ಕಾರಣಗಳೇನು? | ಪಿ.ಸಿ & ಪಿ.ಎನ್.ಡಿ.ಟಿ. ಕಾಯ್ದೆಯ ಉಲ್ಲಂಘನೆ ಮಾಡಿರುವ ಸ್ಕ್ಯಾನಿಂಗ್ ಸೆಂಟರ್‌ಗಳ ವಿರುದ್ಧ ಆಯಾ ಜಿಲ್ಲೆಯಲ್ಲಿನ ಜಿಲ್ಲಾ ಸಕ್ಷಮ ಪ್ರಾಧಿಕಾರಿಗಳು/ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಮುಖಾಂತರ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ದಾಖಲಿಸಲಾಗಿರುತ್ತದೆ. |

....2

| | | |
|---|---|---|
| ಈ) | ಕಳೆದ 02 ವರ್ಷಗಳಲ್ಲಿ ಅನಧಿಕೃತ ಸ್ಕ್ಯಾನಿಂಗ್ ಸೆಂಟರ್‌ಗಳು ಮತ್ತು ಅಲ್ಲಿ ನಕಲು ಪ್ರಮಾಣ ಪತ್ರ ಪಡೆದು ಕೆಲಸ ನಿರ್ವಹಿಸುತ್ತಿರುವ ಸಿಬ್ಬಂದಿಗಳ ವಿರುದ್ಧ ಆರೋಗ್ಯಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳು ಕ್ರಮ ಜರುಗಿಸಿದ ಪ್ರಕರಣಗಳ ಸಂಖ್ಯೆ ಎಷ್ಟು? | ಯಾವುದೇ ಪ್ರಕರಣಗಳು ಇರುವುದಿಲ್ಲ. |
| ಉ) | ಕಾನೂನು ಉಲ್ಲಂಘನೆಯು ಅವ್ಯಾಹತವಾಗಿ ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ., ಇಲ್ಲದಿದ್ದಲ್ಲಿ ಇದಕ್ಕೆ ಕಡಿವಾಣ ಹಾಕುವಲ್ಲಿ ಸರ್ಕಾರವು ವಿಫಲವಾಗಿದೆಯೇ? | ಪಿ.ಸಿ&ಪಿ.ಎನ್.ಡಿ.ಟಿ. ಕಾಯ್ದೆಯನ್ನು ಉಲ್ಲಂಘಿಸಿರುವ ಸ್ಕ್ಯಾನಿಂಗ್ ಸೆಂಟರ್‌ಗಳು ಹಾಗೂ ವೈದ್ಯರ ವಿರುದ್ಧ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ದಾಖಲಿಸಲು ಕ್ರಮ ತೆಗೆದುಕೊಳ್ಳಲಾಗಿದೆ. |

(ಬಿ. ಶ್ರೀರಾಮುಲು)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

**ಮಾನ್ಯ ಶ್ರೀ ಟಿ.ಎ. ಶರವಣ (ವಿಧಾನ ಸಭೆಯಿಂದ ಚುನಾಯಿತರಾದವರು), ವಿಧಾನ ಪರಿಷತ್ ಸದಸ್ಯರು ಇವರ ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ: 42, ಭ್ರೂಣ ಹತ್ಯೆಯನ್ನು ತಡೆಯುವಲ್ಲಿ ಇಲಾಖೆಯು ವಿಫಲವಾಗಿರುವ ಕುರಿತು ಪೂರಕ ಟಿಪ್ಪಣಿ**

ಹೆಣ್ಣು ಭ್ರೂಣ ಹತ್ಯೆ ತಡೆಯಲು ಗರ್ಭಧಾರಣ ಮತ್ತು ಪ್ರಸವ ಪೂರ್ವ ಪತ್ತೆ ತಂತ್ರ ವಿಧಾನಗಳ (ಲಿಂಗ ಆಯ್ಕೆಯ ನಿಷೇಧ) ಅಧಿನಿಯಮ, 1994 ಕಾಯ್ದೆಯನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದು ಲಿಂಗಾನುಪಾತ ಸರಿದೂಗಿಸಲು ಈ ಕೆಳಕಾಣಿಸಿದ ಕ್ರಮಕೈಗೊಳ್ಳಲಾಗಿದೆ.

- ಕರ್ನಾಟಕ ರಾಜ್ಯದಲ್ಲಿ 0-6 ವರ್ಷದ ಮಕ್ಕಳ ಲಿಂಗಾನುಪಾತವು 2001 ರ ಜನಗಣತಿಯಲ್ಲಿ 946 ಇದ್ದು, 2011 ರಲ್ಲಿ 948 ಕ್ಕೆ ಹೆಚ್ಚಾಗಿರುತ್ತದೆ.
- ರಾಜ್ಯದಲ್ಲಿ ಒಟ್ಟು 4847 ಸ್ಕ್ಯಾನಿಂಗ್ ಸೆಂಟರ್‌ಗಳು ನೊಂದಾಯಿತವಾಗಿದ್ದು, ಅವುಗಳಲ್ಲಿ 269 ಸರ್ಕಾರಿ ಸ್ಕ್ಯಾನಿಂಗ್ ಸೆಂಟರ್‌ಗಳಿರುತ್ತವೆ. (ಡಿಸೆಂಬರ್ 2019 ರ ತ್ರೈಮಾಸಿಕ ವರದಿಯಂತೆ)
- ಹೆಣ್ಣು ಭ್ರೂಣ ಹತ್ಯೆ ಅಥವಾ ಅನಧಿಕೃತ ಸೆಂಟರ್‌ಗಳ ವಿರುದ್ಧ ಸಾರ್ವಜನಿಕರು ಮಾಹಿತಿ ನೀಡಲು 104 ದೂರವಾಣಿ ಸಂಖ್ಯೆಯಿಂದ ಅವಕಾಶ ಮಾಡಿಕೊಡಲಾಗಿದೆ.
- ಅನಧಿಕೃತ ಸ್ಕ್ಯಾನಿಂಗ್ ಸೆಂಟರ್ ವಿರುದ್ಧ ಮತ್ತು ಅಕ್ರಮ ಗರ್ಭಪಾತ ಎಸೆಗುವವರ ವಿರುದ್ಧ ದೂರು ನೀಡಿದವರಿಗೆ ರೂ.50,000/- ಬಹುಮಾನ ಘೋಷಿಸಿ ಪತ್ರಿಕಾ ಪ್ರಕಟಣೆ, ಸ್ಥಳೀಯ ಪತ್ರಿಕೆಯಲ್ಲೂ ಕೂಡ ನೀಡಲಾಗಿದೆ.
- 2002 ರಿಂದ ಇಲ್ಲಿಯವರೆಗೆ 82 ಪ್ರಕರಣಗಳು ನ್ಯಾಯಾಲಯದಲ್ಲಿ ಹೂಡಿದ್ದು, 41 ಪ್ರಕರಣಗಳು ಚಾಲ್ತಿಯಲ್ಲಿರುತ್ತವೆ. 41 ಪ್ರಕರಣಗಳಲ್ಲಿ ಆರೋಪಿಗಳಿಗೆ ನ್ಯಾಯಾಲಯದಲ್ಲಿ ದಂಡ ವಿಧಿಸಿ, ಪ್ರಕರಣ ಮುಕ್ತಾಯಗೊಳಿಸಲಾಗಿದೆ.
- ಪಿ.ಸಿ&ಪಿ.ಎನ್.ಡಿ.ಟಿ. (Pre Conception and Pre Natal Diagnostic Techniques Act) ಕಾಯ್ದೆಯ ಕುರಿತು All India Radio ಖಾಸಗಿ ರೇಡಿಯೋ, ಖಾಸಗಿ ಟಿ.ವಿ. ಮಾಧ್ಯಮ ಹಾಗೂ ಸಿನಿಮಾ ಮಂದಿರಗಳ ಮುಖಾಂತರ ಜನಸಾಮಾನ್ಯರಲ್ಲಿ ಅರಿವು ಮೂಡಿಸಲಾಗುತ್ತಿದೆ.
- "ಬಾಲಿಕಾ" Online submission of F-Form ತಂತ್ರಾಂಶ ಜಾರಿಯಲ್ಲಿದ್ದು, ಆನ್‌ಲೈನ್ ಮುಖಾಂತರ ಕಡ್ಡಾಯವಾಗಿ ಎಲ್ಲಾ ಸ್ಕ್ಯಾನಿಂಗ್ ಸೆಂಟರ್‌ಗಳು ನೋಂದಣಿಯಾಗಿದ್ದು, ಎಫ್-ಫಾರಂಗಳನ್ನು ಸಲ್ಲಿಸುತ್ತಿದ್ದಾರೆ.
- ಪ್ರಾಸಿಕ್ಯೂಷನ್ ವಿಭಾಗೀಯ ಮಟ್ಟದಲ್ಲಿ ಆರು ವಿಭಾಗೀಯ ಮಟ್ಟದ ಸರ್ಕಾರಿ ಅಭಿಯೋಜಕರು ಮತ್ತು ಸಹಾಯಕ ಸರ್ಕಾರಿ ಅಭಿಯೋಜಕರಿಗೆ ಪಿ.ಸಿ&ಪಿ.ಎನ್.ಡಿ.ಟಿ. ಕಾಯ್ದೆಯ ಕುರಿತು ಅರಿವು ಮೂಡಿಸುವ ಕಾರ್ಯಗಾರ ನಡೆಸಲಾಗಿದ್ದು, ಕಲ್ಬುರ್ಗಿ ವಿಭಾಗೀಯ ಮಟ್ಟದ ಕಾರ್ಯಗಾರವನ್ನು ನಡೆಸುವ ಪ್ರಕ್ರಿಯೆ ಚಾಲ್ತಿಯಲ್ಲಿದೆ.
- ರಾಜ್ಯ ಮಟ್ಟದಿಂದ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಪಿ.ಸಿ&ಪಿ.ಎನ್.ಡಿ.ಟಿ. ಕಾಯ್ದೆಯ ಕುರಿತು ಅರಿವು ಮೂಡಿಸುವ ಕಾರ್ಯಗಾರಗಳನ್ನು ನಡೆಸಲಾಗುತ್ತಿದೆ.
- ಜಿಲ್ಲಾ ಮಟ್ಟದಲ್ಲಿ ಸ್ಕ್ಯಾನಿಂಗ್ ಸೆಂಟರಿನ ವೈದ್ಯರಿಗೆ, ಆಶಾ ಕಾರ್ಯಕರ್ತೆಯರಿಗೆ, ಕಿರಿಯ ಮಹಿಳಾ ಆರೋಗ್ಯ ಸಹಾಯಕರಿಗೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಿಬ್ಬಂದಿಗಳು ಹಾಗೂ ಇತರ ಸಿಬ್ಬಂದಿಗಳಿಗೆ ಪಿ.ಸಿ&ಪಿ.ಎನ್.ಡಿ.ಟಿ. ಕಾಯ್ದೆಯ ಕುರಿತು ಅರಿವು ಮೂಡಿಸುವ ಕಾರ್ಯಗಾರವನ್ನು ನಡೆಸಲಾಗುತ್ತಿದೆ.

- ಜಿಲ್ಲಾ ಸಕ್ಷಮ ಪ್ರಾಧಿಕಾರಿಗಳಾದ ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ತಪಾಸಣಾ ಮತ್ತು ಮೇಲ್ವಿಚಾರಣಾ ಸಮಿತಿಯು ಸ್ಕ್ಯಾನಿಂಗ್ ಸೆಂಟರ್‌ಗಳಿಗೆ ಪ್ರತಿ ಮೂರು ತಿಂಗಳಿಗೊಮ್ಮೆ ಆಕಸ್ಮಿಕ ಭೇಟಿ ನೀಡಿ, ತಪಾಸಣೆ ನಡೆಸುತ್ತಿರುತ್ತಾರೆ.
- ಪಿ.ಸಿ&ಪಿ.ಎನ್.ಡಿ.ಟಿ. ಕಾಯ್ದೆಯಡಿ ಬರುವ *ಎಲ್ಲಾ ಕಾನೂನು ಬದ್ಧ ಸಮಿತಿಗಳನ್ನು ರಚಿಸಲಾಗಿದೆ.*

ಅನುಬಂಧ

## District Wise Sex Ratio

| SL. No | Name Of the Districts | H.M.I.S 2014-15 SRB | H.M.I.S 2015-16 SRB | H.M.I.S 2016-17 SRB | H.M.I.S 2017-18 SRB | H.M.I.S 2018-19 SRB | H.M.I.S 2019-20 SRB (Up to Oct 2019) |
|---|---|---|---|---|---|---|---|
| 1 | Vijayapura | 948 | 941 | 968 | 984 | 946 | 961 |
| 2 | Belagavi | 927 | 939 | 940 | 949 | 946 | 937 |
| 3 | Bagalakote | 927 | 939 | 946 | 954 | 973 | 959 |
| 4 | Mandya | 919 | 922 | 914 | 912 | 917 | 923 |
| 5 | Bidar | 939 | 912 | 939 | 876 | 927 | 918 |
| 6 | Kalaburagi | 946 | 962 | 977 | 963 | 966 | 961 |
| 7 | Bangalore Rural | 951 | 943 | 953 | 953 | 966 | 889 |
| 8 | Dharawad | 939 | 943 | 942 | 910 | 937 | 966 |
| 9 | Haveri | 942 | 945 | 928 | 951 | 940 | 958 |
| 10 | Gadag | 933 | 958 | 938 | 956 | 968 | 957 |
| 11 | Dakshina Kannada | 965 | 940 | 954 | 935 | 963 | 919 |
| 12 | Chitradurga | 941 | 955 | 948 | 941 | 920 | 938 |
| 13 | Davanagere | 940 | 974 | 964 | 924 | 934 | 929 |
| 14 | Bangalore Urban | 929 | 928 | 939 | 926 | 908 | 853 |
| 15 | Raichur | 913 | 932 | 957 | 925 | 954 | 957 |
| 16 | Yadagiri | 935 | 949 | 959 | 954 | 971 | 970 |
| 17 | Chikkaballapur | 942 | 952 | 947 | 898 | 944 | 928 |
| 18 | Chamarajanagar | 943 | 944 | 966 | 915 | 968 | 1027 |
| 19 | Uttarakannada | 958 | 930 | 977 | 966 | 975 | 978 |
| 20 | Koppal | 940 | 958 | 979 | 958 | 973 | 953 |
| 21 | Udupi | 938 | 1067 | 929 | 945 | 976 | 942 |
| 22 | Tumakuru | 935 | 946 | 933 | 925 | 915 | 940 |
| 23 | Shivamogga | 1005 | 964 | 959 | 952 | 948 | 937 |
| 24 | Ballary | 946 | 936 | 925 | 934 | 962 | 944 |
| 25 | Mysuru | 961 | 952 | 938 | 945 | 930 | 940 |
| 26 | Ramanagar | 952 | 927 | 959 | 948 | 935 | 991 |
| 27 | Kolar | 973 | 951 | 951 | 945 | 934 | 918 |
| 28 | Chikkamagalore | 944 | 960 | 944 | 962 | 949 | 950 |
| 29 | Hassan | 915 | 935 | 957 | 950 | 932 | 945 |
| 30 | Kodagu | 976 | 935 | 973 | 974 | 901 | 927 |
| | **Karnataka** | **944** | **948** | **950** | **940** | **947** | **940** |